# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 212 (196) |
| ಉತ್ತರಿಸಬೇಕಾದ ದಿನಾಂಕ | 14.12.2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯ ಮಡಿಕೇರಿ ನಗರಸಭೆ ವ್ಯಾಪ್ತಿಯ ಎಲ್ಲಾ ಪ್ರದೇಶಗಳಿಗೂ ಯುಜಿಡಿ ವ್ಯವಸ್ಥೆಯನ್ನು ಸಂಪೂರ್ಣವಾಗಿ ಅಳವಡಿಸಲಾಗಿದೆಯೇ; | ಇಲ್ಲ.<br>ಮಡಿಕೇರಿ ನಗರಸಭೆ ವ್ಯಾಪ್ತಿಯ ಪ್ರದೇಶಗಳಿಗೆ ಯುಜಿಡಿ ವ್ಯವಸ್ಥೆಯನ್ನು ಕಲ್ಪಿಸುವ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| ಆ) | ಮಡಿಕೇರಿ ನಗರಸಭೆ ವ್ಯಾಪ್ತಿಯಲ್ಲಿ ಯುಜಿಡಿ ವ್ಯವಸ್ಥೆ ಕಲ್ಪಿಸಬೇಕಾದ ಪ್ರದೇಶಗಳು ಇನ್ನೂ ಉಳಿದಿವೆಯೇ; | ಸದರಿ ಕಾಮಗಾರಿಯಡಿ ಒಟ್ಟು 109.10 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗವನ್ನು ಅಳವಡಿಸಲು ಅನುವುಮಾಡಲಾಗಿದ್ದು, ಸೆಪ್ಟಿಕ್ ಟ್ಯಾಂಕ್ ವಲಯಗಳನ್ನು ಹೊರತುಪಡಿಸಿ ಮಲಿನ ನೀರು ಶುದ್ಧೀಕರಣ ಘಟಕದ ವಲಯಕ್ಕೆ ಬರುವ 85.00 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗದ ಪೈಕಿ 69.00 ಕಿ.ಮೀ ರಷ್ಟು ಕೊಳವೆ ಸಾಲುಗಳನ್ನು ಅಳವಡಿಸಿದೆ ಹಾಗೂ 7373 ಗೃಹ ಸಂಪರ್ಕಗಳಲ್ಲಿ 3400 ಗೃಹ ಸಂಪರ್ಕಗಳನ್ನು ಅಳವಡಿಸಲಾಗಿದೆ. ಸದರಿ ಯೋಜನೆಯಡಿ ಬಾಕಿ ಉಳಿದಿರುವ 40 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗವನ್ನು ಅಳವಡಿಸಿ 3973 ಗೃಹ ಸಂಪರ್ಕಗಳನ್ನು ಒದಗಿಸಬೇಕಾಗಿರುತ್ತದೆ. |
| ಇ) | ಉಳಿದಿದ್ದಲ್ಲಿ, ಇದುವರೆಗೂ ಆ ಪ್ರದೇಶಗಳಿಗೆ ಯುಜಿಡಿ ವ್ಯವಸ್ಥೆ ಕಲ್ಪಿಸದೇ ಇರಲು ಕಾರಣಗಳೇನು: | ➢ ಮಲಿನ ನೀರು ಶುದ್ಧೀಕರಣ ಘಟಕದ ವಲಯಕ್ಕೆ ಒಳಪಡುವ 85.00 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗದ ಪೈಕಿ 69.00 ಕಿ.ಮೀ ರಷ್ಟು ಕೊಳವೆ ಮಾರ್ಗವನ್ನು ಅಳವಡಿಸಿದ್ದು, ಉಳಿದ 16.00 ಕಿ.ಮೀ ಉದ್ದದಷ್ಟು ಕೊಳವೆ ಸಾಲುಗಳನ್ನು |

| | | |
|---|---|---|
| | | ಕಾಂಕ್ರೀಟ್ ಹಾಗೂ ಡಾಂಬರು ರಸ್ತೆಗಳನ್ನು ಕತ್ತರಿಸಿ ಅಳವಡಿಸಲು ಸ್ಥಳೀಯರಿಂದ ತಕರಾರು ಇರುವುದರಿಂದ ಕೊಳವೆ ಸಾಲುಗಳನ್ನು ಅಳವಡಿಸಲು ಸಾಧ್ಯವಾಗಿರುವುದಿಲ್ಲ. ಸದರಿ ವಿಷಯದ ಬಗ್ಗೆ ತಕರಾರು ಬಗೆ ಹರಿಸಲು ನಗರಸಭೆ ರವರಲ್ಲಿ ವಿನಂತಿಸಲಾಗಿದೆ.<br><br>➢ ನಗರದ ರಾಜಶೇಖರ ಹೋಮ್‌ನೀಡ್ಸ್ ಬಳಿ ವೆಟ್‌ವೆಲ್ ನಿರ್ಮಾಣದ ಕಾಮಗಾರಿಗೆ 0.14 ಎಕರೆ ಜಾಗವನ್ನು ಗುರುತಿಸಲಾಗಿದ್ದು ಭೂಸ್ವಾಧೀನ ಪ್ರಕ್ರಿಯೆಯ ಪ್ರಸ್ತಾವನೆಯನ್ನು ನಗರಸಭೆ ಮಡಿಕೇರಿ ರವರು ಸಲ್ಲಿಸಬೇಕಾಗಿರುತ್ತದೆ. ಸದರಿ ಜಮೀನನ್ನು ಹಸ್ತಾಂತರಿಸದ ಕಾರಣ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗಿರುವುದಿಲ್ಲ.<br><br>➢ ನಗರದ ಭೌಗೋಳಿಕ ಸ್ಥಿತಿಗನುಸಾರವಾಗಿ ಒಟ್ಟು 9 ಸಂಖ್ಯೆ ಸೆಪ್ಟಿಕ್ ಟ್ಯಾಂಕ್‌ಗಳನ್ನು ನಿರ್ಮಿಸಬೇಕಾಗಿದ್ದು, ಇವುಗಳಿಗೆ ಅವಶ್ಯಕತೆಯಿರುವ ಜಾಗಗಳನ್ನು ಹಸ್ತಾಂತರಿಸದ ಕಾರಣದಿಂದದಾಗಿ ಕಾಮಗಾರಿಗಳನ್ನು ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ ಹಾಗೂ ಸದರಿ ವಲಯಗಳಲ್ಲಿ ಒಳಚರಂಡಿ ಕೊಳವೆ ಮಾರ್ಗವನ್ನು ಅಳವಡಿಸಲಾಗಿರುವುದಿಲ್ಲ. |
| ಈ) | ಯಾವ ಕಾಲಮಿತಿಯೊಳಗೆ ಸದರಿ ಪ್ರದೇಶಗಳಿಗೆ ಯುಜಿಡಿ ವ್ಯವಸ್ಥೆ ಕಲ್ಪಿಸಲಾಗುವುದು. | ಸದರಿ ಯೋಜನೆಯಡಿ ಕಾಮಗಾರಿಗಳನ್ನು ಕೈಗೆತ್ತಕೊಳ್ಳಲು ಅವಶ್ಯವಿರುವ ಜಾಗಗಳನ್ನು ನಗರಸಭೆ, ಮಡಿಕೇರಿ ರವರು ಹಸ್ತಾಂತರಿಸಿದ ನಂತರ, ಟೆಂಡರ್ ಪ್ರಕ್ರಿಯೆ ಕೈಗೊಂಡು ಒಂದು ವರ್ಷದ ಅವಧಿಯೊಳಗೆ ಯುಜಿಡಿ ವ್ಯವಸ್ಥೆ ಕಲ್ಪಿಸಲು ಕೈಗೊಳ್ಳಲಾಗುವುದು. |

ಸಂಖ್ಯೆ : ನಅಇ 194 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

**(ಬಿ.ಎ. ಬಸವರಾಜ)**
**ನಗರಾಭಿವೃದ್ಧಿ ಸಚಿವರು**